

# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 534 (782) |
| ಸದಸ್ಯರ ಹೆಸರು | : | ಶ್ರೀ ಎಸ್ ರವಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ | : | 10-03-2020 |
| ಉತ್ತರಿಸುವ ಸಚಿವರು | : | ಮಾನ್ಯ ಪೌರಾಡಳಿತ ಹಾಗೂ ತೋಟಗಾರಿಕೆ ಮತ್ತು ರೇಷ್ಮೆ ಸಚಿವರು. |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಮನಗರ-ಬೆಂಗಳೂರು ಗ್ರಾಮಾಂತರ ಜಿಲ್ಲೆಗಳಲ್ಲಿನ ನಗರಸಭೆ-ಪುರಸಭೆ, ಪಟ್ಟಣ ಪಂಚಾಯ್ತಿಗಳಲ್ಲಿ ಘನ ತ್ಯಾಜ್ಯ ನಿರ್ವಹಣೆಯ ಬಗ್ಗೆ ಯಾವ ಕ್ರಮಗಳನ್ನು ಕೈಗೊಳ್ಳಲಾಗಿದೆ; (ವಿವರ ನೀಡುವುದು) | ರಾಮನಗರ-ಬೆಂಗಳೂರು ಜಿಲ್ಲೆಗಳಲ್ಲಿನ ನಗರಸಭೆ-ಪುರಸಭೆ, ಪಟ್ಟಣ ಪಂಚಾಯ್ತಿಗಳಲ್ಲಿ ಘನ ತ್ಯಾಜ್ಯ ನಿರ್ವಹಣೆಯ ಕುರಿತು ಕೈಗೊಳ್ಳಲಾಗುತ್ತಿರುವ ಕ್ರಮಗಳನ್ನು ಅನುಬಂಧ-01ರಲ್ಲಿ ವಿವರಿಸಿದೆ. |
| ಆ) | ಎಸ್.ಎಫ್.ಸಿ ಅನುದಾನ ಮುಖೇನ ನಿಗದಿಪಡಿಸಿರುವ ಕಾರ್ಯಕ್ರಮಗಳಾವವು; ಇದರ ನಿರ್ವಹಣೆಯನ್ನು ಹೇಗೆ ಮಾಡಲಾಗುತ್ತಿದೆ; (ವಿವರ ನೀಡುವುದು) | ಸರ್ಕಾರದ ಸುತ್ತೋಲೆ ಸಂಖ್ಯೆ: ನಅಇ 269 ಎಸ್.ಎಫ್.ಸಿ. 2015, ದಿನಾಂಕ:16-06-2015ರ ಎಸ್.ಎಫ್.ಸಿ. ಮಾರ್ಗಸೂಚಿ ಅನ್ವಯ ಈ ಕೆಳಕಂಡ ಕಾರ್ಯಕ್ರಮಗಳನ್ನು ತೆಗೆದುಕೊಳ್ಳಲು ಸೂಚಿಸಲಾಗಿದೆ. 1)ಕುಡಿಯುವ ನೀರು 2) ತರಕಾರಿ ಮಾರುಕಟ್ಟೆ 3)ಮಾಂಸ, ಕೋಳಿ,ಮೀನು ಮಾರುಕಟ್ಟೆ ಮತ್ತು ಸಣ್ಣ ಪ್ರಮಾಣದ ಮಾರುಕಟ್ಟೆ ನಿರ್ಮಾಣ 5)ಸಾರ್ವಜನಿಕ ಶೌಚಾಲಯಗಳ ನಿರ್ಮಾಣ ಮಾಡುವುದು 6)ಸ್ಮಶಾನ ಅಭಿವೃದ್ಧಿ 7)ಆಂತರಿಕ ರಸ್ತೆಗಳ ಮತ್ತು ಚರಂಡಿಗಳ ನಿರ್ಮಾಣ ಮಾಡುವುದು.<br>ಸದರಿ ಕಾಮಗಾರಿಗಳನ್ನು ಸರ್ಕಾರದ ಸುತ್ತೋಲೆ ಸಂಖ್ಯೆ: ನಅಇ 17 ಎಸ್.ಎಫ್.ಸಿ.2017, ದಿನಾಂಕ: 09-02-2017 ರಲ್ಲಿ ಕಾರ್ಯಗತಗೊಳಸಲು ನಿಗಧಿಪಡಿಸಲಾದ ವೇಳಾಪಟ್ಟಿಯಂತೆ ನಿರ್ವಹಣೆ ಮಾಡಲಾಗುತ್ತಿದೆ. |
| ಇ) | ಎಸ್.ಎಫ್.ಸಿ ಅನುದಾನದ ನಿರ್ವಹಣೆ ಮೂಲಕ ಹಂಚಿಕೆಯಾದ ಮೊತ್ತವೆಷ್ಟು? | ಎಸ್.ಎಫ್.ಸಿ ಮುಕ್ತನಿಧಿ ಯೋಜನೆಯಡಿ ಹಂಚಿಕೆಯಾದ ಮೊತ್ತವನ್ನು ಈ ಕೆಳಕಂಡ ಕೋಷ್ಟಕದಲ್ಲಿ ವಿವರಿಸಲಾಗಿದೆ,<br>**ರಾಮನಗರ ಜಿಲ್ಲೆ:**<br>ರೂ.ಲಕ್ಷಗಳಲ್ಲಿ |

| ಕ್ರ.ಸಂ | ಹಂಚಿಕೆಯಾದ ವರ್ಷ | ಅನುದಾನ ಹಂಚಿಕೆ |
|---|---|---|
| 1 | 2017-18 | 1134.33 |
| 2 | 2018-19 | 1077.87 |
| 3 | 2019-20 | 924.00 |

| | | |
|---|---|---|
| | | ಬೆಂಗಳೂರು ಗ್ರಾಮಾಂತರ ಜಿಲ್ಲೆ:<br>ರೂ.ಲಕ್ಷಗಳಲ್ಲಿ |

| ಕ್ರ.ಸಂ | ಹಂಚಿಕೆಯಾದ ವರ್ಷ | ಅನುದಾನ ಹಂಚಿಕೆ |
|---|---|---|
| 1 | 2017-18 | 948.57 |
| 2 | 2018-19 | 901.00 |
| 3 | 2019-20 | 775.00 |

ಸಂಖ್ಯೆ: ನಅಇ 82 ಸಿಎಸ್‌ಎಸ್ 2020

(ನಾರಾಯಣ ಗೌಡ)
ಪೌರಾಡಳಿತ, ತೋಟಗಾರಿಕೆ ಹಾಗೂ
ರೇಷ್ಮೆ ಸಚಿವರು

ಅನುಬಂಧ-1

ವಿಷಯ: ಶ್ರೀ ಎಸ್. ರವಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) ಮಾನ್ಯ ವಿಧಾನ ಪರಿಷತ್ ಸದಸ್ಯರು ಇವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: 534 (782) ಕ್ಕೆ ಉತ್ತರಿಸುತ್ತಿರುವ ಬಗ್ಗೆ.

| ಜಿಲ್ಲೆ | ನಗರ ಸ್ಥಳೀಯ ಸಂಸ್ಥೆಗಳು | ಮನೆ-ಮನೆ ಕಸ ಸಂಗ್ರಹಣೆ | ಹಸಿ ತ್ಯಾಜ್ಯದಿಂದ ಗೊಬ್ಬರ ತಯಾರಿಸುವುದು | ಒಣ ತ್ಯಾಜ್ಯವನ್ನು ವಿಕೇಂದ್ರಿಕೃತ ವಿಧಾನದಲ್ಲಿ ಸಂಗ್ರಹಿಸಲಾಗುತ್ತಿದೆ. | ಭೂಭರ್ತಿ ಜಾಗ | ಪ್ರಸ್ತುತ ಸಂಸ್ಕರಣೆಯಾಗುತ್ತಿರುವ ತ್ಯಾಜ್ಯದ ಪ್ರಮಾಣ | ವಿಸ್ತ್ರತಾ ಯೋಜನಾ ವರದಿ | ಸಿವಿಲ್ ಕಾಮಗಾರಿಗಳು | ವಾಹನ ಯಂತ್ರೋಪಕರಣಗಳ ಖರೀದಿಯ ವಿವರಗಳು |
|---|---|---|---|---|---|---|---|---|---|
| ರಾಮನಗರ ಜಿಲ್ಲೆ | ರಾಮನಗರ ನಗರಸಭೆ | ಹೌದು | ಹೌದು | ಹೌದು | ಭೂಭರ್ತಿ ಜಾಗವು ವಿವಾದದಲ್ಲಿರುತ್ತದೆ | 10ಟಿ.ಪಿಡಿ | ಪೂರ್ಣಗೊಂಡಿರುತ್ತದೆ | ಕಣ್ವ ಜಲಾಶಯದ ಹತ್ತಿರ ಭೂಭರ್ತಿ ಜಾಗವಿದ್ದು ಕೆಲವೊಂದು ಸಂಘಟನೆಗಳು ಇದನ್ನು ವಿರೋಧಿಸುತ್ತಿರುವುದರಿಂದ ಸಂಸ್ಕರಣೆ ಮತ್ತು ವಿಲೇವಾರಿಯಲ್ಲಿ ವಿಳಂಬವಾಗುತ್ತಿದೆ. | ಖರೀದಿಯಾಗಿರುತ್ತದೆ |
| | ಚನ್ನಪಟ್ಟಣ ನಗರಸಭೆ | ಹೌದು | ಹೌದು | ಹೌದು | ಲಭ್ಯವಿರುವುದಿಲ್ಲ | 4 ಟಿ.ಪಿಡಿ | ಪೂರ್ಣಗೊಂಡಿರುತ್ತದೆ | ಟೆಂಡರ್ ಕರೆದು ಕಾಮಗಾರಿಗಳು ಮುಕ್ತಾಯದ ಹಂತದಲ್ಲಿರುತ್ತದೆ | ಟೆಂಡರ್ ಪ್ರಕ್ರಿಯೆಯು ಪ್ರಗತಿಯಲ್ಲಿರುತ್ತದೆ |
| | ಕನಕಪುರ ನಗರಸಭೆ | ಹೌದು | ಹೌದು. | ಹೌದು | ಲಭ್ಯವಿರುತ್ತದೆ | 4 ಟಿ.ಪಿಡಿ | ಪೂರ್ಣಗೊಂಡಿರುತ್ತದೆ | ಟೆಂಡರ್ ಕರೆದು ಕಾಮಗಾರಿಗಳು ಮುಕ್ತಾಯದ ಹಂತದಲ್ಲಿರುತ್ತದೆ | ಟೆಂಡರ್ ಪ್ರಕ್ರಿಯೆಯು ಪ್ರಗತಿಯಲ್ಲಿರುತ್ತದೆ |
| | ಮಾಗಡಿ ಪುರಸಭೆ | ಹೌದು | ಹೌದು. | ಹೌದು | ಲಭ್ಯವಿರುತ್ತದೆ | 4 ಟಿ.ಪಿಡಿ | ಪೂರ್ಣಗೊಂಡಿರುತ್ತದೆ | ಟೆಂಡರ್ ಕರೆದು ಕಾಮಗಾರಿಗಳು ಪ್ರಗತಿಯ ಹಂತದಲ್ಲಿರುತ್ತದೆ | ಟೆಂಡರ್ ದರಗಳಿಗೆ ಅನುಮೋದನೆ ಪಡೆಯಬೇಕಿರುತ್ತದೆ. |
| | ಬಿಡದಿ ಪುರಸಭೆ | ಹೌದು | ಹೌದು | ಹೌದು | ಲಭ್ಯವಿರುವುದಿಲ್ಲ | 5 ಟಿ.ಪಿಡಿ | ವಿಸ್ತೃತ ಕ್ರಿಯಾ ಯೋಜನೆ ತಯಾರಿಕೆ ಹಂತದಲ್ಲಿರುತ್ತದೆ | – | |
| ಂಗಳೂರು ಗ್ರಾಮಾಂತ | ದೊಡ್ಡಬಳ್ಳಾಪುರ | ಹೌದು | ಹೌದು | ಹೌದು | ಲಭ್ಯವಿರುತ್ತದೆ | 18 ಟಿ.ಪಿಡಿ | ಪೂರ್ಣಗೊಂಡಿರುತ್ತದೆ | ಕಾಮಗಾರಿಗಳು ಪ್ರಗತಿಯ ಹಂತದಲ್ಲಿರುತ್ತದೆ | ಟೆಂಡರ್ ದರಗಳಿಗೆ ಅನುಮೋದನೆ ಪಡೆಯಬೇಕಿರುತ್ತದೆ. |
| | ಹೊಸಕೋಟೆ | ಹೌದು | ಹಸಿ ಕಸವನ್ನು ರೈತರಿಗೆ ನೀಡಲಾಗುತ್ತಿದೆ. | – | ಲಭ್ಯವಿರುವುದಿಲ್ಲ | 2 ಟಿ.ಪಿಡಿ | ಪೂರ್ಣಗೊಂಡಿರುತ್ತದೆ | ಟೆಂಡರ್ ಕರೆದು ಕಾಮಗಾರಿಗಳು ಪ್ರಗತಿಯ ಹಂತದಲ್ಲಿರುತ್ತದೆ | ಟೆಂಡರ್ ದರಗಳು ಅನುಮೋದನೆ ಪಡೆಯಬೇಕಿರುತ್ತದೆ. |
| | ದೇವನಹಳ್ಳಿ ಪುರಸಭೆ | ಹೌದು | ಹೌದು | ನಿರ್ಮಾಣದ ಹಂತದಲ್ಲಿರುತ್ತದೆ | ಖರೀದಿಯ ಹಂತದಲ್ಲಿರುತ್ತದೆ | 3 ಟಿ.ಪಿಡಿ | ಪೂರ್ಣಗೊಂಡಿರುತ್ತದೆ | ಸಿವಿಲ್ ಕಾಮಗಾರಿಗಳುಮುಕ್ತಾಯದ ಹಂತದಲ್ಲಿರುತ್ತದೆ | ಖರೀದಿಯಾಗಿರುತ್ತದೆ |
| | ವಿಜಯಪುರ ಪುರಸಭೆ | ಹೌದು | ಹೌದು | ಹೌದು | ಲಭ್ಯವಿರುವುದಿಲ್ಲ | 0 ಟಿ.ಪಿಡಿ | ಪೂರ್ಣಗೊಂಡಿರುತ್ತದೆ | – | ಖರೀದಿಯಾಗಿರುತ್ತದೆ |
| | ನೆಲಮಂಗಲ ಪುರಸಭೆ | ಹೌದು | ಹೌದು | ನಿರ್ಮಾಣದ ಹಂತದಲ್ಲಿರುತ್ತದೆ | ಲಭ್ಯವಿರುತ್ತದೆ | 3 ಟಿ.ಪಿಡಿ | ವಿಸ್ತೃತ ಕ್ರಿಯಾ ಯೋಜನೆ ತಯಾರಿಕೆ ಹಂತದಲ್ಲಿರುತ್ತದೆ | ಸಿವಿಲ್ ಕಾಮಗಾರಿಗಳು ಟೆಂಡರ್ ಹಂತದಲ್ಲಿರುತ್ತದೆ. | ರೀದಿಯಾ ಹಂತದಲ್ಲಿರುತ್ತ |

Executive Engineer
Directorate of Municipal Administration
Bangalore.

AE/Env-I

ಕರ್ನಾಟಕ ಸರ್ಕಾರ

ಸಂಖ್ಯೆ: ನಅಇ 269 ಎಸ್‌ಎಫ್‌ಸಿ 2015

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸಸೌಧ,
ಬೆಂಗಳೂರು, ದಿನಾಂಕ:16-06-2015.

## ಸುತ್ತೋಲೆ

ವಿಷಯ:2015-16ನೇ ಸಾಲಿನ ರಾಜ್ಯ ಹಣಕಾಸು ಆಯೋಗದ ಮುಕ್ತನಿಧಿ (ಇತರೆ ಅವತರಣದಡಿ ಬಂಡವಾಳ ಆಸ್ತಿಗಳ ಸೃಜನೆ) ಅನುದಾನದ ಬಳಕೆ ಕುರಿತು ಮಾರ್ಗಸೂಚಿಗಳನ್ನು ನಿಗಧಿಪಡಿಸುವ ಬಗ್ಗೆ.

*****

2015-16ನೇ ಸಾಲಿನಲ್ಲಿ ರೂ.103030.00ಲಕ್ಷಗಳ ಮುಕ್ತನಿಧಿ (ಬಂಡವಾಳ ಆಸ್ತಿಗಳ ಸೃಜನೆ) ಅನುದಾನವನ್ನು ನಗರ ಸ್ಥಳೀಯ ಸಂಸ್ಥೆಗಳಿಗೆ ನಿಗಧಿ ಮಾಡಲಾಗಿದೆ.

ಪ್ರಸಕ್ತ ಆರ್ಥಿಕ ವರ್ಷದಲ್ಲಿ ಕಾಮಗಾರಿಗಳನ್ನು ಶೀಘ್ರವಾಗಿ ಪ್ರಾರಂಭಿಸಲು ಆಡಳಿತಾತ್ಮಕ ಹಾಗೂ ತಾಂತ್ರಿಕ ಮಂಜೂರಾತಿ ಪ್ರಕ್ರಿಯೆಗಳನ್ನು ವಿಳಂಬವಿಲ್ಲದೇ ಕೈಗೊಳ್ಳುವುದು ಮತ್ತು ಯೋಜನೆಗಳನ್ನು ಕಾಲಮಿತಿಯೊಳಗೆ ಸಮರ್ಪಕವಾಗಿ ಅನುಷ್ಠಾನ ಮಾಡಿ ಸಾರ್ವಜನಿಕರು ಯೋಜನೆಗಳ ಪೂರ್ಣ ಪ್ರಯೋಜನ ಪಡೆಯಲು ಅನುವಾಗುವಂತೆ, ಇಲಾಖೆ ಹಾಗೂ ನಗರ ಸ್ಥಳೀಯ ಸಂಸ್ಥೆಗಳ ಅಧಿಕಾರಿಗಳು ಹಾಗೂ ಇಂಜಿನಿಯರ್‌ಗಳು ಹೆಚ್ಚಿನ ಪರಿಶ್ರಮ ವಹಿಸುವುದು ಅತ್ಯಗತ್ಯವಾಗಿದೆ.

ಈ ಹಿನ್ನಲೆಯಲ್ಲಿ ಕಾರ್ಯಕ್ರಮದ ಸಮರ್ಪಕ ಅನುಷ್ಠಾನದ ದೃಷ್ಟಿಯಿಂದ 2015-16ನೇ ಸಾಲಿನಿಂದ ಅನ್ವಯಿಸುವಂತೆ ಈ ಕೆಳಕಂಡ ಮಾರ್ಗಸೂಚಿ/ನಿರ್ದೇಶನವನ್ನು ಹೊರಡಿಸಲಾಗಿದೆ.

- ನಿರ್ದೇಶಕರು, ಪೌರಾಡಳಿತ ನಿರ್ದೇಶನಾಲಯ ಇವರು ಯೋಜನೆಯ ನೋಡಲ್ ಅಧಿಕಾರಿಯಾಗಿರುತ್ತಾರೆ.
- ನಗರ ಸ್ಥಳೀಯ ಸಂಸ್ಥೆಗೆ ಹಂಚಿಕೆಯಾದ ಒಟ್ಟು ಅನುದಾನ ಸಂಬಂಧಿಸಿದ ಸ್ಥಳೀಯ ಸಂಸ್ಥೆಗಳು ಕ್ರಿಯಾ ಯೋಜನೆಯನ್ನು 15 ದಿನಗಳೊಳಗೆ ತಯಾರಿಸುವುದು.
- ಕ್ರಿಯಾಯೋಜನೆ ತಯಾರಾದ ಕೂಡಲೇ ಪೌರ ಸಂಸ್ಥೆಗಳ ಇಂಜಿನಿಯರಿಂಗ್ ಸಿಬ್ಬಂದಿ ಕಾಮಗಾರಿಗಳ ವಿವರವಾದ ಅಂದಾಜು ಪಟ್ಟಿಯನ್ನು ಸಿದ್ಧಪಡಿಸುವುದು.
- ನಗರ ಸ್ಥಳೀಯ ಸಂಸ್ಥೆಯಿಂದ ಸ್ವೀಕೃತವಾದ ಕ್ರಿಯಾ ಯೋಜನೆಯನ್ನು ಜಿಲ್ಲಾ ನಗರಾಭಿವೃದ್ಧಿ ಕೋಶದ ಯೋಜನಾ ನಿರ್ದೇಶಕರು ಪರಿಶೀಲಿಸಿ 7 ದಿನಗಳ ಒಳಗೆ ಜಿಲ್ಲಾಧಿಕಾರಿಗಳವರ ಅನುಮೋದನೆ ಪಡೆಯತಕ್ಕದ್ದು.
- ಸುತ್ತೋಲೆಯಲ್ಲಿ ನಿಗಧಿಪಡಿಸಿರುವ ವಿವಿಧ ಕಾಮಗಾರಿ ಅಂಶಗಳು ಹಾಗೂ ಇತರೆ ಅವಕಾಶಗಳನ್ನು ಕ್ರಿಯಾಯೋಜನೆಯಲ್ಲಿ ಅಳವಡಿಸಿರುವ ಬಗ್ಗೆ ಜಿಲ್ಲಾಧಿಕಾರಿಗಳು ಪರಿಶೀಲನೆ ಮಾಡಿ ಕ್ರಿಯಾಯೋಜನೆಗೆ ಅನುಮೋದನೆ ನೀಡತಕ್ಕದ್ದು.

- ಕಾಮಗಾರಿಗಳ ಟೆಂಡರ್ ಪ್ರಕ್ರಿಯೆ ಮುಗಿದ 15 ದಿನಗಳ ಒಳಗೆ ಕಾಮಗಾರಿಗಳನ್ನು ಪ್ರಾರಂಭಿಸುವುದು.
- ಕಾಮಗಾರಿಗಳನ್ನು ಶೀಘ್ರವಾಗಿ ಹಾಗೂ ಗುಣಮಟ್ಟದೊಂದಿಗೆ ನಿರ್ವಹಿಸಲು ಬಿಡಿಬಿಡಿಯಾಗಿ ಟೆಂಡರ್ ಕರೆಯದೆ ಪ್ಯಾಕೇಜ್ ರೀತಿಯಲ್ಲಿ ಟೆಂಡರ್ ಕರೆಯುವುದು.
- ಕಾಮಗಾರಿಗಳನ್ನು ಕೈಗೊಳ್ಳುವಾಗ ಅಲ್ಪಾವಧಿ ಟೆಂಡರ್ ಸೇರಿದಂತೆ ಎಲ್ಲಾ ಟೆಂಡರ್ ಪ್ರಕ್ರಿಯೆಯಲ್ಲಿ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಕಾಯ್ದೆ ಮತ್ತು ನಿಯಮಗಳನ್ನು ಕಡ್ಡಾಯವಾಗಿ ಪಾಲಿಸತಕ್ಕದ್ದು.
- ನಗರ ಸ್ಥಳೀಯ ಸಂಸ್ಥೆಗೆ ನಿಗಧಿಮಾಡಿಪುವ ಪೂರ್ಣ ಅನುದಾನಕ್ಕೆ ಅನುಮೋದನೆ ನೀಡಿರುವ ಕ್ರಿಯಾ ಯೋಜನೆಗೆ ಅನುಗುಣವಾಗಿ ಆಡಳಿತಾತ್ಮಕ ಹಾಗೂ ತಾಂತ್ರಿಕ ಮಂಜೂರಾತಿಯನ್ನು ಸಕ್ಷಮ ಪ್ರಾಧಿಕಾರಗಳು ನೀಡುವುದು.
- ಅನುಮೋದಿತ ಕ್ರಿಯಾ ಯೋಜನೆಯ ಪ್ರತಿಯನ್ನು ಜಿಲ್ಲಾಧಿಕಾರಿಗಳು ಪೌರಾಡಳಿತ ನಿರ್ದೇಶಕರಿಗೆ ಕಡ್ಡಾಯವಾಗಿ ಸಲ್ಲಿಸತಕ್ಕದ್ದು.
- ಕ್ರಿಯಾಯೋಜನೆ ಸಿದ್ದಪಡಿಸುವಾಗ ಹಿಂದುಳಿದ/ಕೊಳಚೆ ಪ್ರದೇಶದ ಅಭಿವೃದ್ಧಿ ಹಾಗೂ ಶೌಚಾಲಯ, ನೀರು, ಬೀದಿ ದೀಪ, ರಸ್ತೆ ನಿರ್ಮಾಣ ಮುಂತಾದ ಮೂಲಭೂತ ಸೌಕರ್ಯಗಳಿಗೆ ಪ್ರಥಮ ಆಧ್ಯತೆ ನೀಡುವುದು.
- ಟೆಂಡರ್ ಪ್ರಕ್ರಿಯೆಯನ್ನು ಜಿಲ್ಲಾಧಿಕಾರಿಗಳ ಅನುಮೋದನೆಯೊಂದಿಗೆ ಅಲ್ಪಾವಧಿ ಟೆಂಡರ್ ಮೂಲಕ ನಿರ್ವಹಿಸುವುದು. ವರ್ಷದ ಕೊನೆಯಲ್ಲಿ ಟೆಂಡರ್ ಕರೆಯದೆ ವರ್ಷದ ಪ್ರಾರಂಭದಲ್ಲಿಯೇ ಕರೆಯಲು ಕ್ರಮ ತೆಗೆದುಕೊಳ್ಳುವುದು.
- **ರಾಜ್ಯ ಮಟ್ಟದಲ್ಲಿ ಪೌರಾಡಳಿತ ನಿರ್ದೇಶಕರು ಹಾಗೂ ಜಿಲ್ಲಾ ಮಟ್ಟದಲ್ಲಿ ಜಿಲ್ಲಾಧಿಕಾರಿಗಳು** ಪ್ರತಿ ತಿಂಗಳು ಪ್ರಗತಿ ಪರಿಶೀಲನೆ ಮಾಡುವುದು ಮತ್ತು ಅನುಷ್ಟಾನ ವೇಳೆಯಲ್ಲಿ ಉಂಟಾಗುವ ತೊಂದರೆಗಳನ್ನು **ಸಕ್ಷಮ ಪ್ರಾಧಿಕಾರದಿಂದ** ಪರಿಹರಿಸಿಕೊಳ್ಳುವುದು.

ಮುಕ್ತನಿಧಿ ಅನುದಾನದ ಬಳಕೆಗೆ ಸೂತ್ರಗಳು:

**A)** 1) ಬಿಡುಗಡೆಗೊಳಿಸಿದ ಅನುದಾನದಲ್ಲಿ ಸರ್ಕಾರದ ಸುತ್ತೋಲೆ ಸಂಖ್ಯೆ: ನಅಇ/23/ಪಿಎಸ್‌ಜಿ/2014 ದಿನಾಂಕ 18/09/2014ರ ಅನ್ವಯ ಶೇ.24.10 ರಷ್ಟು ಅನುದಾನವನ್ನು ಪರಿಶಿಷ್ಟ ಜಾತಿ (ಶೇ. 17.15)/ ಪರಿಶಿಷ್ಟ ಪಂಗಡ (ಶೇ. 6.95) ದವರಿಗಾಗಿ ಮೀಸಲಿರಿಸಿ, ಖರ್ಚು ಮಾಡುವುದು.

2) ಹಾಗೂ ಇತರೆ ಬಡಜನರ ಕಲ್ಯಾಣಕ್ಕಾಗಿ ಶೇಕಡ 7.25 ರಷ್ಟು ಅನುದಾನವನ್ನು ಮೀಸಲಿರಿಸುವುದು ಮತ್ತು ಈ ನಿಧಿಯನ್ನು ಸುತ್ತೋಲೆ ಸಂಖ್ಯೆ: ನಅಇ 415 ಜಿಇಎಲ್ 2011, ದಿನಾಂಕ:27-02-2012ರಲ್ಲಿ ಸೂಚಿಸಿರುವಂತೆ ನಗರದ ಇತರೆ ಬಡಜನರಿಗಾಗಿ ಮತ್ತು ಶೇ.3ರಷ್ಟು ಅನುದಾನವನ್ನು ಅಂಗವಿಕಲರ ಅಭಿವೃದ್ಧಿಗಾಗಿ ಖರ್ಚು ಮಾಡುವುದು. ಈ ಬಗ್ಗೆ ಚಾಲ್ತಿ ನಿಯಮಾವಳಿ/ಮಾರ್ಗದರ್ಶಿ ಸೂತ್ರಗಳ ಅನ್ವಯ ಕಾರ್ಯಕ್ರಮ/ ಕಾಮಗಾರಿಗಳ ಕ್ರಿಯಾ ಯೋಜನೆಯನ್ನು ತಯಾರಿಸಿ. ಜಿಲ್ಲಾಧಿಕಾರಿಯವರಿಂದ ಅನುಮೋದನೆ ಪಡೆದು ನಿಗಧಿತ ಸಮಯದೊಳಗೆ ಕಾರ್ಯಗತಗೊಳಿಸುವುದು.

3) ಹಿಂದಿನ ಸಾಲಿನ ಎಸ್.ಎಫ್.ಸಿ ಮುಕ್ತನಿಧಿ ಅನುದಾನದ ಅನುಮೋದಿತ ಕ್ರಿಯಾಯೋಜನೆಯಲ್ಲಿ ಇರುವ ಹಾಗೂ ಮುಕ್ತ ಸಾಲಿಗೆ ಮುಂದುವರೆದಿರುವ ಕಾಮಗಾರಿಗಳನ್ನು (Spillover works) ಪೂರ್ಣಗೊಳಿಸಲು ಅವಶ್ಯವಿರುವ ಅನುದಾನವನ್ನು ನಗರ ಸ್ಥಳೀಯ ಸಂಸ್ಥೆಗಳು ಕ್ರಿಯಾ ಯೋಜನೆ ಸಿದ್ಧಪಡಿಸುವ ಸಾಲಿಗೆ ನಿಗಧಿಯಾಗಿರುವ ಒಟ್ಟು ಅನುದಾನದಲ್ಲಿ ಕಡ್ಡಾಯವಾಗಿ ಮೀಸಲಿಡತಕ್ಕದ್ದು.

B) ಕ್ರಿಯಾ ಯೋಜನೆಗೆ ಅನುಮೋದನೆ ನೀಡುವ ಪೂರ್ವದಲ್ಲಿ ಮೇಲಿನ ಕಂಡಿಕೆ (1), (2) ಮತ್ತು (3) ರಲ್ಲಿ ತಿಳಿಸಿರುವ ಉದ್ದೇಶಗಳಿಗೆ ಸಂಪೂರ್ಣ ಅನುದಾನವನ್ನು ಮೀಸಲಿಟ್ಟಿರುವ ಬಗ್ಗೆ ಖಚಿತಪಡಿಸಿಕೊಂಡು ನಂತರ ಉಳಿಯುವ ಅನುದಾನದಲ್ಲಿ ನಗರ ಸ್ಥಳೀಯ ಸಂಸ್ಥೆಗಳ ಈ ಕೆಳಕಂಡ ಕಾಮಗಾರಿಗಳಿಗೆ ಜಿಲ್ಲಾಧಿಕಾರಿಗಳು ಅನುಮೋದನೆ ನೀಡತಕ್ಕದ್ದು.

1) ಕುಡಿಯುವ ನೀರಿನ ಯೋಜನೆಗೆ ಅದರಲ್ಲೂ ಅಭಾವ ಪರಿಸ್ಥಿತಿ ನಿಭಾಯಿಸುವ ಯೋಜನೆಗಳಿಗೆ ಆದ್ಯತೆಯ ಮೇಲೆ ಅವಕಾಶ ಕಲ್ಪಿಸುವುದು.
2) ತರಕಾರಿ ಮಾರುಕಟ್ಟೆ, ಮಾಂಸ, ಕೋಳಿ ಹಾಗೂ ಮೀನು ಮಾರುಕಟ್ಟೆ ಮತ್ತು ಸಣ್ಣ ಪ್ರಮಾಣದ ಮಾರುಕಟ್ಟೆ (Mini Markets) ನಿರ್ಮಾಣ.
3) ನಿರ್ಮಲ ನಗರ **ಅನುಮೋದಿತ ಮಾದರಿಯಂತೆ** ಸುಸಜ್ಜಿತ ಸಾರ್ವಜನಿಕ ಶೌಚಾಲಯಗಳ ನಿರ್ಮಾಣ ಮಾಡುವುದು.
4) ಸಾರ್ವಜನಿಕ ಶೌಚಾಲಯಗಳ ನಿರ್ಮಾಣಕ್ಕೆ ಸ್ಥಳೀಯ ಸಂಸ್ಥೆಗೆ ಸೇರಿರುವ ಜಾಗ ಲಭ್ಯವಿಲ್ಲದ ಪ್ರಕರಣಗಳಲ್ಲಿ ಮಾತ್ರ ನಿಯಮಾನುಸಾರ ಜಮೀನಿನ ಖರೀದಿಗೆ ಅವಕಾಶ ಕಲ್ಪಿಸುವುದು.
5) ಸ್ಮಶಾನ ಅಭಿವೃದ್ಧಿ.
6) ಆಂತರಿಕ ರಸ್ತೆಗಳ ಮತ್ತು ಚರಂಡಿಗಳ ನಿರ್ಮಾಣ. (ಮಣ್ಣಿನ ರಸ್ತೆ ಹಾಗೂ ಕಲ್ಲು ಕಟ್ಟಡದ ಚರಂಡಿಗಳ ನಿರ್ಮಾಣಕ್ಕೆ ಅವಕಾಶವಿಲ್ಲ) ಧೀರ್ಘಕಾಲ ಬಾಳಿಕೆ ಬರುವ ಸಿಮೆಂಟ್ ಕಾಂಕ್ರೀಟ್ ರಸ್ತೆ ಹಾಗೂ ಚರಂಡಿ ನಿರ್ಮಾಣಕ್ಕೆ ಒತ್ತು ನೀಡುವುದು.
7) ಸ್ಥಳೀಯ ಸಂಸ್ಥೆಗಳು ಯಾವುದಾದರು ಸಾಲವನ್ನು ಹೊಂದಿದ್ದಲ್ಲಿ ಅದರ ಮರುಪಾವತಿಗೆ ಅವಕಾಶ ಕಲ್ಪಿಸತಕ್ಕದ್ದು.
8) ಯು.ಐ.ಡಿ.ಎಸ್.ಎಸ್.ಎಂ.ಟಿ ಯೋಜನೆಗಳನ್ನು ಅನುಷ್ಠಾನಗೊಳಿಸುವಾಗ **ಯೋಜನಾ ವೆಚ್ಚದ ಶೇಕಡ 10 ರಷ್ಟನ್ನು ಸ್ಥಳೀಯ ಸಂಸ್ಥೆಯ ವಂತಿಕೆಯಾಗಿ** ಪ್ರತ್ಯೇಕವಾದ ಖಾತೆಗೆ ಜಮೆ ಮಾಡತಕ್ಕದ್ದು.
9) ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿಯು ನಿಗಧಿಪಡಿಸಿರುವ ಮಾನದಂಡಗಳಂತೆ ಕೊಳಚೆ ನೀರು ಸಂಸ್ಕರಣೆ ಮಾಡಲು ಅವಶ್ಯವಿರುವ ಆಧುನಿಕ ಸೌಲಭ್ಯಗಳನ್ನು ಅಳವಡಿಸುವುದು ಹಾಗೂ ಸಂಸ್ಕರಣೆಗಾಗಿ EM ದ್ರಾವಣ ಅಥವಾ Micro bial ತಂತ್ರಜ್ಞಾನ ಬಳಸಲು ಕ್ರಮ ಕೈಗೊಳ್ಳುವುದು.
10) ಇತರೆ [illegible]/ಯೋಜನೆಗಳಲ್ಲಿ ಇರುವ ಕೊರತೆಯನ್ನು (Short fall/viability gap funding) ಸರಿದೂಗಿಸಲು ಉಪಯೋಗಿಸತಕ್ಕದ್ದು.
11) ಈ ಮೇಲ್ಕಂಡ ಯೋಜನೆಗಳು ಪೌರ ಸಂಸ್ಥೆಗಳಲ್ಲಿ ಪರಿಪೂರ್ಣವಾಗಿದ್ದಾಗ ಮಾತ್ರ ಜಿಲ್ಲಾಧಿಕಾರಿಗಳ ಪೂರ್ವ ಅನುಮತಿ ಪಡೆದು ಬೇರೆ ಯೋಜನೆಗಳಿಗೆ ಅನುದಾನ ವರ್ಗಾಯಿಸಿಕೊಳ್ಳಬಹುದು.

ಮೇಲಿನ ಕಂಡಿಕೆ (A) ಮತ್ತು (B) ಯಲ್ಲಿ ಸೂಚಿಸಿರುವ ಕಾಮಗಾರಿಗಳನ್ನು ಕೈಗೊಳ್ಳುವಾಗ ಬಡ ಜನರು ವಾಸಿಸುವ ಪ್ರದೇಶ ಮತ್ತು ಕೊಳಚೆ ಪ್ರದೇಶಗಳಲ್ಲಿ ಈ ಕಾರ್ಯ ಚಟುವಟಿಕೆಗಳನ್ನು ಹೆಚ್ಚಿನ ಸಂಖ್ಯೆಯಲ್ಲಿ ಅಳವಡಿಸಕೊಳ್ಳತಕ್ಕದ್ದು. ಅಲ್ಲದೆ ಬಡವರು ಹೆಚ್ಚಾಗಿ ವಾಸಿಸುತ್ತಿರುವ ಬಡಾವಣೆಗಳಲ್ಲಿ/ಕೊಳಚೆ ಪ್ರದೇಶಗಳಲ್ಲಿ ನಾಗರೀಕ ಮೂಲ ಸೌಕರ್ಯ ಮತ್ತು ಸೇವೆಗಳನ್ನು ಸಮಗ್ರವಾಗಿ ಒದಗಿಸಲು ಕಾರ್ಯಕ್ರಮ ಹಮ್ಮಿಕೊಳ್ಳತಕ್ಕದ್ದು.

ಈ ಎಲ್ಲಾ ಕಾರ್ಯ ಚಟುವಟಿಕೆಗಳನ್ನು ಹಮ್ಮಿಕೊಳ್ಳುವಾಗ ವೆಚ್ಚವು ಶೇಕಡಾ 20ಕ್ಕಿಂತ ಕಡಿಮೆ ಇಲ್ಲದಂತೆ ನಿಗಧಿಗೊಳಿಸಿ, ಈ ಸೌಲಭ್ಯವನ್ನು ಸಮುದಾಯದ ಬಡ ವರ್ಗದ ಜನರಿಗೆ ಒದಗಿಸುವಂತೆ ಸೂಚಿಸಿದೆ.

ಮೇಲೆ ನಿಗಧಿಪಡಿಸಿರುವ ಮಾರ್ಗಸೂಚಿಗಳು / ನಿರ್ದೇಶನಗಳನ್ನು ಕಟ್ಟುನಿಟ್ಟಾಗಿ ಅಳವಡಿಸಿಕೊಂಡು ಎಲ್ಲಾ ಜಿಲ್ಲಾಧಿಕಾರಿಗಳು ಹಾಗೂ ನಗರ ಸ್ಥಳೀಯ ಸಂಸ್ಥೆಗಳು ಯೋಜನೆಯ ಅನುಷ್ಠಾನಕ್ಕೆ ಅವಶ್ಯ ಕ್ರಮಗಳನ್ನು ಕೈಗೊಂಡು ಬಿಡುಗಡೆಯಾಗುವ ಸಂಪೂರ್ಣ ಅನುದಾನವನ್ನು ವರ್ಷಾಂತ್ಯದ ಒಳಗೆ ಕಡ್ಡಾಯವಾಗಿ ಬಳಕೆ ಮಾಡಿಕೊಳ್ಳತಕ್ಕದ್ದು.

ಇದಕ್ಕೆ ವ್ಯತಿರಿಕ್ತವಾಗಿ ಕಾರ್ಯನಿರ್ವಹಿಸಿ ಯೋಜನೆಯನ್ನು ಸಮರ್ಪಕವಾಗಿ ಅನುಷ್ಟಾನ ಮಾಡದ ಅಧಿಕಾರಿಗಳ ಮೇಲೆ ಶಿಸ್ತಿನ ಕ್ರಮ ಕೈಗೊಳ್ಳಲಾಗುವುದು.

ವಿಶೇಷ ಸೂಚನೆ:- ಆರಂಭಿಕ ಶಿಲ್ಕನ್ನು ಒಳಗೊಂಡಂತೆ ಶೇ.75ರಷ್ಟು ಪ್ರಗತಿ ಸಾಧಿಸಿದ ನಗರ ಸ್ಥಳೀಯ ಸಂಸ್ಥೆಗಳಿಗೆ ಮಾತ್ರ ಮುಂದಿನ ಕಂತಿನ ಅನುದಾನವನ್ನು ಬಿಡುಗಡೆ ಮಾಡಲು ಕ್ರಮವಹಿಸಲಾಗುವುದು. ಹಣ ಬಳಕೆ ಪ್ರಮಾಣ ಪತ್ರವನ್ನು ಕಡ್ಡಾಯವಾಗಿ, ಜಿಲ್ಲಾಧಿಕಾರಿ ಮೇಲು ಸಹಿಯೊಂದಿಗೆ ಸಲ್ಲಿಸುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ
ಮತ್ತು ಅವರ ಹೆಸರಿನಲ್ಲಿ,

(ಕೆ.ಎಸ್ ಭಾಗ್ಯಮ್ಮ)
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ

**ಪ್ರತಿಯನ್ನು :**

1) ನಿರ್ದೇಶಕರು, ಪೌರಾಡಳಿತ ನಿರ್ದೇಶನಾಲಯ, ಬೆಂಗಳೂರು.
2) ಎಲ್ಲಾ ಜಿಲ್ಲಾಧಿಕಾರಿಗಳು. ಪೌರಾಡಳಿತ ನಿರ್ದೇಶನಾಲಯದ ಮುಖಾಂತರ.
3) ಎಲ್ಲಾ ಮಹಾನಗರಪಾಲಿಕೆಗಳ ಆಯುಕ್ತರು. ಪೌರಾಡಳಿತ ನಿರ್ದೇಶನಾಲಯದ ಮುಖಾಂತರ.
4) ಎಲ್ಲಾ ನಗರಸಭೆಗಳ ಪೌರಾಯುಕ್ತರು/ಮುಖ್ಯಾಧಿಕಾರಿಗಳು/ಎಲ್ಲಾ ಪುರಸಭೆ/ಪಟ್ಟಣ ಪಂಚಾಯತಿಗಳು ಪೌರಾಡಳಿತ ನಿರ್ದೇಶನಾಲಯದ ಮುಖಾಂತರ.
5) ಮಾನ್ಯ ಮುಖ್ಯ ಮಂತ್ರಿಯವರ ಪ್ರಧಾನ ಕಾರ್ಯದರ್ಶಿಯವರ ಆಪ್ತ ಕಾರ್ಯದರ್ಶಿ
6) ಮಾನ್ಯ ನಗರಾಭಿವೃದ್ಧಿ ಸಚಿವರ ಆಪ್ತ ಕಾರ್ಯದರ್ಶಿ.
7) ಮಾನ್ಯ ಪೌರಾಡಳಿತ ಮತ್ತು ಸಾರ್ವಜನಿಕ ಉದ್ದಿಮೆಗಳ ಸಚಿವರ ಆಪ್ತ ಕಾರ್ಯದರ್ಶಿ.
8) ಸರ್ಕಾರದ ಕಾರ್ಯದರ್ಶಿಗಳು, ನಗರಾಭಿವೃದ್ಧಿ ಇಲಾಖೆ ಇವರ ಆಪ್ತ ಸಹಾಯಕರು
9) ಉಪ ಕಾರ್ಯದರ್ಶಿ ಮತ್ತು ಜಂಟಿ ನಿರ್ದೇಶಕರು(ಯೋಜನೆ), ನಗರಾಭಿವೃದ್ಧಿ ಇಲಾಖೆ
10) ಜಂಟಿ ನಿರ್ದೇಶಕರು (ಆಡಳಿತ), ಜಂಟಿ ನಿರ್ದೇಶಕರು (ಅಭಿವೃದ್ಧಿ), ಜಂಟಿ ನಿರ್ದೇಶಕರು (ಹಣಕಾಸು) ಮತ್ತು ಅಧೀಕ್ಷಕ ಅಭಿಯಂತರರು, ಪೌರಾಡಳಿತ ನಿರ್ದೇಶನಾಲಯ.
11) ಶಾಖಾ ರಕ್ಷಾ ಕಡತ
12) ಹೆಚ್ಚುವರಿ ಪ್ರತಿ.



# ಕರ್ನಾಟಕ ಸರ್ಕಾರ

ಸಂಖ್ಯೆ:ನಅಇ 17 ಎಸ್‌ಎಫ್‌ಸಿ 2017

ಕರ್ನಾಟಕ ಸರ್ಕಾರ ಸಚಿವಾಲಯ
4ನೇ ಮಹಡಿ, ವಿಕಾಸ ಸೌಧ
ಬೆಂಗಳೂರು, ದಿನಾಂಕ: 09-02-2017.

## ಸುತ್ತೋಲೆ

ವಿಷಯ:- ಆಯಾ ಆರ್ಥಿಕ ವರ್ಷಗಳಿಗೆ ಸರ್ಕಾರದಿಂದ ಬಿಡುಗಡೆಯಾಗುವ ಅನುದಾನಗಳಿಗೆ ಪೂರಕವಾಗಿ ಕ್ರಿಯಾ ಯೋಜನೆಗಳನ್ನು ಸಿದ್ಧಪಡಿಸುವ ಬಗ್ಗೆ.

*~*~*

ವಿಷಯಕ್ಕೆ ಸಂಬಂಧಿಸಿದಂತೆ, ಈ ಮೂಲಕ ತಿಳಿಯಪಡಿಸುವುದೇನೆಂದರೆ, 2016-17ನೇ ಸಾಲಿನ ಆರ್ಥಿಕ ವರ್ಷವು ಕೊನೆಗೊಳ್ಳುತ್ತಾ ಬಂದಿದ್ದು, ಸದರಿ ಸಾಲಿನಲ್ಲಿ ಮಂಜೂರಾಗಿರುವ ಕ್ರಿಯಾ ಯೋಜನೆಗಳಲ್ಲಿಯ ಕಾಮಗಾರಿಗಳ ಪ್ರಗತಿಯು ತುಂಬಾ ಕಡಿಮೆಯಾಗಿದ್ದು, ಇಲಾಖೆ ವತಿಯಿಂದ ಸರ್ಕಾರಕ್ಕೆ ಮತ್ತು ಮಾನ್ಯ ಮುಖ್ಯಮಂತ್ರಿಗಳು ಹಾಗೂ ಸಂಬಂಧಿಸಿದ ಸಚಿವರುಗಳಿಗೆ ವರದಿ ಮಾಡುವಲ್ಲಿ ಮುಜುಗರ ಉಂಟಾಗುತ್ತಿದೆ.

ಆದ್ದರಿಂದ ನಿಗದಿತ ಆರ್ಥಿಕ ವರ್ಷದಲ್ಲಿ ಪ್ರಗತಿ ಸಾಧಿಸುವಲ್ಲಿ ವಿಳಂಬವಾಗುವುದನ್ನು ತಡೆಗಟ್ಟಲು ಈ ಕೆಳಗಿನ ಕ್ರಮಗಳನ್ನು ಕಡ್ಡಾಯವಾಗಿ ಕೈಗೊಳ್ಳಲು ತಿಳಿಸಲಾಗಿದೆ.

1. ಕೇಂದ್ರ ಹಣಕಾಸು (14ನೇ ಹಣಕಾಸು) ಆಯೋಗ ಅನುದಾನದ ಆಯಾ ಆರ್ಥಿಕ ವರ್ಷಕ್ಕೆ ನಿಗದಿಗೊಳಿಸಿದ ಅನುದಾನಕ್ಕೆ ಸಂಬಂಧಿಸಿದಂತೆ—ಈಗಾಗಲೇ ನಿಗದಿಪಡಿಸಲಾಗಿರುವ ಮೊತ್ತಕ್ಕೆ ಮುಂದಿನ ವರ್ಷದ ನಗರ ಸ್ಥಳೀಯ ಸಂಸ್ಥೆಗಳ ಆಯವ್ಯಯ ಮಂಡನೆಯ ಸಮಯದಲ್ಲಿಯೇ ಕರಡು ಕ್ರಿಯಾ ಯೋಜನೆ ತಯಾರಿಸಿ ಆಯವ್ಯಯದೊಂದಿಗೆ ಕೆ.ಎಂ.ಬಿ.ಎ.ಆರ್.-2006ರಂತೆ ಮಂಜೂರಾತಿಯನ್ನು ಪಡೆಯತಕ್ಕದ್ದು.

2. ಎಸ್‌ಎಫ್‌ಸಿ ಅನುದಾನಕ್ಕೆ ಸಂಬಂಧಿಸಿದಂತೆ, ಹಿಂದಿನ ಆರ್ಥಿಕ ವರ್ಷಕ್ಕೆ ನಿಗದಿಪಡಿಸಲಾದ ಅನುದಾನದ ಮೇಲೆ ಶೇ.10 ರಿಂದ 20ರಷ್ಟು ಮೊತ್ತವನ್ನು ಹೆಚ್ಚುವರಿ ಮಾಡಿಕೊಂಡು ಮುಂದಿನ ವರ್ಷದ ನಗರ ಸ್ಥಳೀಯ ಸಂಸ್ಥೆಗಳ ಆಯವ್ಯಯ ಮಂಡನೆಯ ಸಮಯದಲ್ಲಿಯೇ ಕರಡು ಕ್ರಿಯಾ ಯೋಜನೆ ತಯಾರಿಸಿ ಆಯವ್ಯಯದೊಂದಿಗೆ ಕೆ.ಎಂ.ಬಿ.ಎ.ಆರ್.-2006ರಂತೆ ಮಂಜೂರಾತಿಯನ್ನು ಪಡೆಯತಕ್ಕದ್ದು.

3. ಎಸ್‌ಎಫ್‌ಸಿ ಮುಕ್ತನಿಧಿಯಿಂದ ಮತ್ತು ನಗರ ಸ್ಥಳೀಯ ಸಂಸ್ಥೆಗಳ ಸಾಮಾನ್ಯ ನಿಧಿ ಶೇ.24.10, ಶೇ.7.25 ಮತ್ತು ಶೇ.3ರ ಅನುದಾನಕ್ಕೆ ಪೂರಕವಾಗಿ ಕ್ರಮ ಸಂಖ್ಯೆ:(2)ರಲ್ಲಿ ಲಭ್ಯವಾಗುವ ಹಾಗೂ ನಗರ ಸ್ಥಳೀಯ ಸಂಸ್ಥೆಗಳ ಆಯವ್ಯಯದ ಲೆಕ್ಕಾಚಾರದ ತಖ್ತೆಯ ಅನುಗುಣವಾದ ಮೊತ್ತಕ್ಕೆ ಮುಂದಿನ ವರ್ಷದ ನಗರ ಸ್ಥಳೀಯ ಸಂಸ್ಥೆಗಳ ಆಯವ್ಯಯ ಮಂಡನೆಯ ಸಮಯದಲ್ಲಿಯೇ ಕರಡು ಕ್ರಿಯಾ ಯೋಜನೆ ತಯಾರಿಸಿ ಆಯವ್ಯಯದೊಂದಿಗೆ ಕೆ.ಎಂ.ಬಿ.ಎ.ಆರ್.-2006ರಂತೆ ಮಂಜೂರಾತಿಯನ್ನು ಪಡೆಯತಕ್ಕದ್ದು.

4. ಕ್ರಿಯಾ ಯೋಜನೆಯಲ್ಲಿ ಅಳವಡಿಸಲಾಗುವ ಕಾಮಗಾರಿಗಳಿಗೆ ಸಂಬಂಧಿಸಿದಂತೆ ಸ್ಥಳ ಪರಿಶೀಲನೆ ಮಾಡಿ ಅಗತ್ಯತೆಗೆ ಅನುಸಾರವಾಗಿ ಅಂದಾಜು ಪತ್ರಿಕೆಗಳನ್ನು ತಯಾರಿಸಿ ಮುಂಜಾಗ್ರತೆಯಾಗಿ ಇಟ್ಟುಕೊಳ್ಳತಕ್ಕದ್ದು.

5. ಕರಡು ಕ್ರಿಯಾ ಯೋಜನೆಯಲ್ಲಿ ಕಾಮಗಾರಿಗಳ ಪಟ್ಟಿ ಮತ್ತು ಫಲಾನುಭವಿಗಳ ಪಟ್ಟಿಯನ್ನು ಮೊದಲನೇ ಆದ್ಯತೆಗೆ ಅನುಸಾರವಾಗಿ ತಯಾರಿಸಿ ಇಡತಕ್ಕದ್ದು ಮತ್ತು ತಯಾರಿಸಲಾದ ಪಟ್ಟಿಯಲ್ಲಿ ಮೇಲಿನ ಕ್ರಮ ಸಂಖ್ಯೆಯಿಂದ ಅವುಗಳನ್ನು ಮಂಜೂರು ಮಾಡಲು ಕ್ರಮವಹಿಸತಕ್ಕದ್ದು.

6. ಕಾಮಗಾರಿಗಳ ಆಯ್ಕೆಯನ್ನು ಅಗ್ರತ್ಯತೆಗೆ ಮತ್ತು ಆದ್ಯತೆಗೆ ಅನುಸಾರವಾಗಿ ಹಾಲಿ ಇರುವ ಮಾರ್ಗಸೂಚಿಗಳನ್ವಯ ತಯಾರಿಸತಕ್ಕದ್ದು. ಒಂದು ವೇಳೆ ಮಾರ್ಗಸೂಚಿಯಲ್ಲಿ ಬದಲಾವಣೆಗಳು ಆದಾಗ್ಯೂ ಕೂಡ ಮಾರ್ಚ್ ಅಂತ್ಯದೊಳಗಾಗಿ ಕಾಮಗಾರಿ / ಫಲಾನುಭವಿಗಳ ಕಾರ್ಯಕ್ರಮ ಪಟ್ಟಿಯನ್ನು ಅಂತಿಮಗೊಳಿಸುವಂತಿರತಕ್ಕದ್ದು.

14/02

ಯೋಜನೆಗಳನ್ನು ಕಾರ್ಯಗತಗೊಳಿಸಲು ನಿಗದಿಪಡಿಸಲಾದ ವೇಳಾಪಟ್ಟಿ.

| ಕ್ರ.ಸಂ | ವಿವರ | ಆಯಾ ಆರ್ಥಿಕ ವರ್ಷದ ಅಂತಿಮ ದಿನಾಂಕ |
|---|---|---|
| 1. | ಎಸ್ಎಫ್‌ಸಿ ಮುಕ್ತನಿಧಿ ಮತ್ತು 14ನೇ ಹಣಕಾಸು ಆಯೋಗದ ಅನುದಾನ, ಶೇ.24.10, ಶೇ.7.25 ಮತ್ತು ಶೇ.3ರ ಅನುದಾನಕ್ಕೆ ಪೂರಕವಾಗಿ ಕರಡು ಕ್ರಿಯಾ ಯೋಜನೆಯನ್ನು ತಯಾರಿಸಿ, ಎಂ.ಆರ್.ಸಿ ವೆಬ್‌ಸೈಟ್‌ನಲ್ಲಿ ಅಳವಡಿಸಲು ಕೊನೆಯ ದಿನಾಂಕ | 31–ಮಾರ್ಚ್ |
| 2. | ಕ್ರಿಯಾ ಯೋಜನೆಗೆ ಜಿಲ್ಲಾಧಿಕಾರಿಗಳಿಂದ ಮಂಜೂರಾತಿ ಪಡೆಯಲು ಕೊನೆಯ ದಿನಾಂಕ. | 30–ಏಪ್ರಿಲ್ |
| 3. | ವಿವರವಾದ ಅಂದಾಜು ಪತ್ರಿಕೆಗಳನ್ನು ತಯಾರಿಸಿ, ತಾಂತ್ರಿಕ ಮಂಜೂರಾತಿ ಮತ್ತು ಆಡಳಿತಾತ್ಮಕ ಮಂಜೂರಾತಿಗಳನ್ನು ಪಡೆಯಲು ಕೊನೆಯ ದಿನಾಂಕ. | 15–ಮೇ |
| 4. | ಡಿ.ಟಿ.ಎಸ್. ಗಳಿಗೆ ಅನುಮೋದನೆ ಪಡೆದು ಟೆಂಡರ್ ಕರೆಯಲು ಕೊನೆಯ ದಿನಾಂಕ. | 30–ಮೇ |
| 5. | ಟೆಂಡರ್ ಪ್ರಕ್ರಿಯೆ ಅಂತಿಮಗೊಳಿಸಿ ಕಾಮಗಾರಿಗಳಿಗೆ ಆದೇಶ ನೀಡಲು-ಕೊನೆಯ ದಿನಾಂಕ.(ರೂ. 2.00 ಕೋಟಿ ಮೊತ್ತದವರೆಗೆ ಗರಿಷ್ಠ ಕಾಲಾವಧಿ) | 15–ಜುಲೈ |
| 6. | ಕಾಮಗಾರಿಗಳನ್ನು ಶೇ.100ರಷ್ಟು ಪೂರ್ಣಗೊಳಿಸಲು ನಿಗದಿಪಡಿಸಲಾದ ಅಂತಿಮ ದಿನಾಂಕ. | 30–ಡಿಸೆಂಬರ್ |
| 7. | ಫಲಾನುಭವಿಗಳ ಪಟ್ಟಿಯನ್ನು ಅಂತಿಮಗೊಳಿಸಲು ಕೊನೆಯ ದಿನಾಂಕ. | 15–ಮೇ |

ಮೇಲ್ಕಂಡ ಅಂಶಗಳ ಕುರಿತಂತೆ ರಾಜ್ಯದ ಎಲ್ಲಾ ನಗರ ಸ್ಥಳೀಯ ಸಂಸ್ಥೆಗಳು ಕಡ್ಡಾಯವಾಗಿ ಪೂರ್ವಸಿದ್ಧತೆಗಳನ್ನು ಮಾಡಿಕೊಂಡು ಆಯಾ ಆರ್ಥಿಕ ವರ್ಷದ ಕಾರ್ಯಕ್ರಮಗಳ ಅನುಷ್ಠಾನಕ್ಕೆ ಸಂಬಂಧಿಸಿದಂತೆ ಯಾವುದೇ ರೀತಿಯಾದ ವಿಳಂಬಗಳಿಗೆ ಅವಕಾಶ ಕಲ್ಪಿಸದಂತೆ ನೋಡಿಕೊಳ್ಳತಕ್ಕದ್ದು. ತಪ್ಪಿದಲ್ಲಿ ಸಂಬಂಧಪಟ್ಟ ಸ್ಥಳೀಯ ಸಂಸ್ಥೆಗಳ ಆಡಳಿತ ಮಂಡಳಿಯ ಮುಖ್ಯಸ್ಥರು ಮತ್ತು ಆಯುಕ್ತರು / ಪೌರಾಯುಕ್ತರು / ಮುಖ್ಯಾಧಿಕಾರಿಗಳು ಹಾಗೂ ಸಂಬಂಧಿಸಿದ ಅಧಿಕಾರಿ / ಸಿಬ್ಬಂದಿಗಳನ್ನು ನೇರ ಹೊಣೆಗಾರರನ್ನಾಗಿ ಮಾಡಲಾಗುವುದು.

ಸಂಬಂಧಿತ ಜಿಲ್ಲೆಗಳ ಜಿಲ್ಲಾಧಿಕಾರಿಗಳು / ಜಿಲ್ಲಾ ನಗರಾಭಿವೃದ್ಧಿ ಕೋಶದ ಯೋಜನಾ ನಿರ್ದೇಶಕರುಗಳು ಈ ಬಗ್ಗೆ ಪರಿಶೀಲನೆ ಮಾಡಿ ನಗರ ಸ್ಥಳೀಯ ಸಂಸ್ಥೆಗಳು ಈ ಬಗ್ಗೆ ಕ್ರಮವಹಿಸುವಂತೆ ಸೂಕ್ತ ನಿರ್ದೇಶನ ನೀಡಲು ತಿಳಿಸಲಾಗಿರುತ್ತದೆ.

ಒಂದು ವೇಳೆ ಯಾವುದೇ ಸ್ಥಳೀಯ ಸಂಸ್ಥೆಯವರು ಮೇಲಿನ ಅಂಶಗಳನ್ನು ಪಾಲಿಸುವಲ್ಲಿ ಅನಗತ್ಯ ವಿಳಂಬಧೋರಣೆ ತೋರಿದಲ್ಲಿ ತಮ್ಮ ಹಂತದಲ್ಲಿ ಮೇಲ್ಕಂಡ ವೇಳಾಪಟ್ಟಿ ಪ್ರಕಾರ ಕ್ರಮವಹಿಸಿ ಮಂಜೂರಾತಿ ನೀಡಲು ಮತ್ತು ಅವರುಗಳ ಮೇಲೆ ಶಿಸ್ತಿನ ಕ್ರಮಕ್ಕೆ ಸರ್ಕಾರಕ್ಕೆ ಸೂಕ್ತ ವರದಿ ಮಾಡಲು ಸಂಬಂಧಿಸಿದ ಜಿಲ್ಲೆಗಳ ಜಿಲ್ಲಾಧಿಕಾರಿಗಳಿಗೆ ಸೂಚಿಸಲಾಗಿದೆ.

(ವಿ. ಪೊನ್ನುರಾಜು)
ಸರ್ಕಾರದ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ

ಇವರಿಗೆ.

1. ನಿರ್ದೇಶಕರು, ಪೌರಾಡಳಿತ ನಿರ್ದೇಶನಾಲಯ, ಬೆಂಗಳೂರು.
2. ರಾಜ್ಯದ ಎಲ್ಲಾ ಜಿಲ್ಲೆಗಳ ಜಿಲ್ಲಾಧಿಕಾರಿಗಳಿಗೆ.
3. ರಾಜ್ಯದ ಎಲ್ಲಾ ಮಹಾನಗರಪಾಲಿಕೆಗಳ ಆಯುಕ್ತರುಗಳಿಗೆ.
4. ರಾಜ್ಯದ ಎಲ್ಲಾ ಜಿಲ್ಲೆಗಳ ಜಿಲ್ಲಾ ನಗರಾಭಿವೃದ್ಧಿ ಕೋಶದ ಯೋಜನಾ ನಿರ್ದೇಶಕರುಗಳಿಗೆ.
5. ರಾಜ್ಯದ ಎಲ್ಲಾ ನಗರ ಸ್ಥಳೀಯ ಸಂಸ್ಥೆಗಳ ಪೌರಾಯುಕ್ತರು / ಮುಖ್ಯಾಧಿಕಾರಿಗಳಿಗೆ.